## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1017

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 22-12-2021. (ಕಂದಾಯ ಇಲಾಖೆಯಿಂದ ವರ್ಗಾವಣೆಯಾದ ಪ್ರಶ್ನೆ)

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಭೂ ಪರಿವರ್ತನೆಯಾಗಿರುವ ಜಾಗಗಳನ್ನು ಕ್ರಮಬದ್ಧ ಆಸ್ತಿಗಳೆಂದು ಪರಿಗಣಿಸಿ ಖಾಲಿ ಜಾಗಗಳಿಗೆ ವಿನ್ಯಾಸ ನಕ್ಷೆ ಮಂಜೂರಾತಿಯನ್ನು ಗ್ರಾಮ ಪಂಚಾಯತ್ / ತಾಲ್ಲೂಕು ಪಂಚಾಯತ್‌ಗಳಿಂದ ನೀಡಲಾಗುತ್ತಿದ್ದು ಭೂ ಪರಿವರ್ತನೆಯಾಗಿರುವ ಜಾಗಗಳಲ್ಲಿ ಈಗಾಗಲೇ ಮನೆ / ಕಟ್ಟಡಗಳನ್ನು ನಿರ್ಮಿಸಿದ್ದಲ್ಲಿ ವಿನ್ಯಾಸ ನಕ್ಷೆ ಮಂಜೂರಾತಿ ನೀಡುವಾಗ ಅನುಸರಿಸಬೇಕಾದ ಕ್ರಮಗಳೇನು; | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧ ಆಸ್ತಿಗಳಿಗೆ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9 ಮತ್ತು 11ಎ ಯನ್ನು ಪಡೆಯಲು ಆಸ್ತಿಯ ಮಾಲೀಕರು ಆಸ್ತಿಗೆ ಸಂಬಂಧಿಸಿದ 1) ಜಿಲ್ಲಾಧಿಕಾರಿಗಳ ಭೂ ಪರಿವರ್ತನೆ ಆದೇಶ 2) ಸ್ಥಳೀಯ ಯೋಜನಾ ಪ್ರದೇಶಕ್ಕೆ ಒಳಪಟ್ಟಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ನಗರಾಭಿವೃದ್ಧಿ ಪ್ರಾಧಿಕಾರ / ಯೋಜನಾ ಪ್ರಾಧಿಕಾರಿಗಳಿಂದ ವಿನ್ಯಾಸ ನಕ್ಷೆ ಅನುಮೋದನೆ ಅಥವಾ ಸ್ಥಳೀಯ ಯೋಜನಾ ಪ್ರದೇಶದ ಹೊರಗಡೆ ಒಂದು ಎಕರೆಗಿಂತ ಕಡಿಮೆ ಇರುವ ಭೂ ಪರಿವರ್ತಿತ ಜಮೀನುಗಳಿಗೆ ತಾಲ್ಲೂಕು ಪಂಚಾಯತಿಯಿಂದ ವಿನ್ಯಾಸ ನಕ್ಷೆ ಅನುಮೋದನೆ ಪಡೆದ ದಾಖಲೆಗಳನ್ನು ಒದಗಿಸಿದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ-9 ಮತ್ತು 11ಎ ವಿತರಿಸುತ್ತಾರೆ.<br><br>ತದನಂತರ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 64 ರಂತೆ ಮನೆ ನಿರ್ಮಾಣ ಮಾಡಿಕೊಳ್ಳಲು ಗ್ರಾಮ ಪಂಚಾಯತಿಯಿಂದ ಕಟ್ಟಡ ಅನುಮತಿ ಪತ್ರ ಪಡೆಯಬೇಕಾಗಿರುತ್ತದೆ.<br><br>ಒಂದು ವೇಳೆ ಭೂ ಪರಿವರ್ತನೆಯಾಗಿದ್ದು, ವಿನ್ಯಾಸ ನಕ್ಷೆ ಪಡೆಯದೆ ಮತ್ತು ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 64 ರಂತೆ ಮನೆ ನಿರ್ಮಾಣ ಮಾಡಿಕೊಳ್ಳಲು ಗ್ರಾಮ ಪಂಚಾಯತಿಯಿಂದ ಕಟ್ಟಡ ಅನುಮತಿ ಪತ್ರ ಪಡೆಯದ ಮನೆ ನಿರ್ಮಾಣ ಮಾಡಿಕೊಂಡಿದ್ದಲ್ಲಿ ಗ್ರಾಮ ಪಂಚಾಯತಿ / ತಾಲ್ಲೂಕು ಪಂಚಾಯತಿಯು ವಿನ್ಯಾಸ ನಕ್ಷೆ ಮಂಜೂರಾತಿ ನೀಡಲು ಅವಕಾಶವಿರುವುದಿಲ್ಲ. |
| (ಆ) | ಭೂ ಪರಿವರ್ತನೆಯಾಗಿರುವ ಜಾಗಗಳಿಗೆ ನಮೂನೆ-9 ಮತ್ತು 11ಎ ಅನ್ನು ಪಡೆಯದೇ ಬ್ಯಾಂಕುಗಳು, ಕಟ್ಟಡ ಇತ್ಯಾದಿಗಳಿಗೆ ಸಾಲ ನೀಡಿ, ಸಾಲ ಪಡೆದವರು ಸಾಲವನ್ನು ಮರು ಪಾವತಿಸದೇ ಬ್ಯಾಂಕುಗಳು ಅಂತಹವರ ಜಾಗವನ್ನು ಏಲಂ ಮೂಲಕ ವಿಲೇ ಮಾಡಿದ ನಂತರ ನಮೂನೆ-9 ಮತ್ತು 11ಎ ನ್ನು ಸಾಲ ಪಡೆದವರ ಹೆಸರು ಇರುತ್ತದೆಯೇ ಅಥವಾ ಏಲಂ ವಹಿಸಿಕೊಂಡವರ ಹೆಸರಿನಲ್ಲಿ ಇರುತ್ತದೆಯೇ? (ಸಂಪೂರ್ಣ ವಿವರದೊಂದಿಗೆ ವಿಸ್ತೃತ ಮಾಹಿತಿ ನೀಡುವುದು) | ಬ್ಯಾಂಕಿನಿಂದ ಸಾಲ ಪಡೆದಿರುವವರ ಆಸ್ತಿಯು ಕ್ರಮಬದ್ಧವಾದ ನಮೂನೆ-9 ಮತ್ತು 11ಎ ಪಡೆಯಲು ಅರ್ಹವಾಗಿದ್ದಲ್ಲಿ ಬ್ಯಾಂಕ್ ಹರಾಜಿನ ಮೂಲಕ ಆಸ್ತಿಯನ್ನು ಖರೀದಿಸಿದವರ ಹೆಸರಿಗೆ ಇ-ಸ್ವತ್ತು ತಂತ್ರಾಂಶದಲ್ಲಿ ನಮೂನೆ-9 ಮತ್ತು 11ಎ ನೀಡಲು ಅವಕಾಶ ಕಲ್ಪಿಸಲಾಗಿದೆ. |

ಸಂ. ಗ್ರಾಅಪ 471 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.